# ಕರ್ನಾಟಕ ವಿಧಾನ ಪರಿಷತ್ತು

1. ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 530
2. ವಿಧಾನ ಪರಿಷತ್ತಿನ ಸದಸ್ಯರ ಹೆಸರು : ಶ್ರೀ ವಿಜಯ ಸಿಂಗ್
3. ಉತ್ತರಿಸುವ ದಿನಾಂಕ : 09.03.2020
4. ಉತ್ತರಿಸುವ ಸಚಿವರು : ಮಾನ್ಯ ಕಾರ್ಮಿಕ ಮತ್ತು ಸಕ್ಕರೆ ಸಚಿವರು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| (ಅ) | ಬೀದರ್ ಜಿಲ್ಲೆಯಲ್ಲಿ ಬಾಲಕಾರ್ಮಿಕರು ಹೆಚ್ಚಾಗಿದ್ದು, ಇದನ್ನು ತಡೆಗಟ್ಟಲು ಸರ್ಕಾರ ಕೈಗೊಂಡ ಕ್ರಮಗಳೇನು; | ಬೀದರ್ ಜಿಲ್ಲೆಯಲ್ಲಿ ಬಾಲಕಾರ್ಮಿಕ ಪದ್ಧತಿಯನ್ನು ತಡೆಗಟ್ಟಲು ಬಾಲಕಾರ್ಮಿಕ ಮತ್ತು ಕಿಶೋರ (ನಿಷೇಧ ಮತ್ತು ನಿಯಂತ್ರಣ) ಕಾಯ್ದೆ, 1986ರಡಿ ದೂರು ಆಧಾರಿತ ಹಾಗೂ ಹಠಾತ್ ದಾಳಿಗಳನ್ನು ನಡೆಸಿ ಕೆಲಸದಲ್ಲಿ ತೊಡಗಿರುವ ಬಾಲಕಾರ್ಮಿಕರನ್ನು ಬಿಡುಗಡೆಗೊಳಿಸಿ ಮಕ್ಕಳ ಕಲ್ಯಾಣ ಸಮಿತಿ (ಸಿಡಬ್ಲ್ಯೂಸಿ)ಗೆ ಮತ್ತು ಮುಖ್ಯವಾಹಿನಿ ಶಾಲೆಗಳಿಗೆ ದಾಖಲಿಸಲಾಗಿರುತ್ತದೆ, ತಪ್ಪಿತಸ್ಥ ಮಾಲೀಕರ ವಿರುದ್ಧ ನಿಯಮಾನುಸಾರ ಕ್ರಮ ಕೈಗೊಳ್ಳಲಾಗುತ್ತಿದೆ.<br>• ಜಿಲ್ಲಾಧಿಕಾರಿಗಳ ನೇತೃತ್ವದ ಜಿಲ್ಲಾ ಬಾಲಕಾರ್ಮಿಕ ಯೋಜನಾ ಸೊಸೈಟಿ ಕಾರ್ಮಿಕ ಇಲಾಖೆ ಹಾಗೂ ಶಿಕ್ಷಣ ಇಲಾಖೆ, ಪೊಲೀಸ್ ಇಲಾಖೆ, ಕಂದಾಯ ಇಲಾಖೆ, ಮಹಿಳಾ ಮಕ್ಕಳ ಕಲ್ಯಾಣ ಇಲಾಖೆ ಹಾಗೂ ಇತರೆ ಸಂಬಂಧಿಸಿದ ಇಲಾಖೆಗಳ ಸಹಯೋಗದೊಂದಿಗೆ ಜಿಲ್ಲಾದ್ಯಂತ ಬಾಲಕಾರ್ಮಿಕ ಪದ್ಧತಿ ನಿರ್ಮೂಲನೆ ಕುರಿತಾಗಿ ಕಾನೂನು ಅರಿವು ಕಾರ್ಯಕ್ರಮಗಳು, ಬೀದಿ ನಾಟಕಗಳು, ಕರಪತ್ರ ಹಂಚುವಿಕೆ ಹಾಗೂ ಆಟೋ ಪ್ರಚಾರದ ಮೂಲಕ ಜಾಗೃತಿ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗುತ್ತಿದೆ.<br>• ಬೀದರ್ ಜಿಲ್ಲೆಯಲ್ಲಿ ರಾಜ್ಯ ಬಾಲಕಾರ್ಮಿಕ ಯೋಜನೆ (ಎಸ್.ಸಿ.ಎಲ್.ಪಿ) ಜಾರಿಯಲ್ಲಿದ್ದು, ಬೀದರ್ ನಗರದಲ್ಲಿ 2019ರ ಜೂನ್ ತಿಂಗಳ ವರೆಗೂ ಬಾಲಕಾರ್ಮಿಕ ವಿಶೇಷ ತರಬೇತಿ ಕೇಂದ್ರವು ಕಾರ್ಯನಿರ್ವಹಿಸಿದೆ.<br>• ಕಳೆದ ಮೂರು ವರ್ಷಗಳಲ್ಲಿ ಬೀದರ್ ಜಿಲ್ಲೆಗೆ ಸಂಬಂಧಿಸಿದಂತೆ ಕೈಗೊಂಡ ಕಾನೂನಾತ್ಮಕ ಕ್ರಮಗಳ ಕುರಿತಾದ ಮಾಹಿತಿಯನ್ನು ಅನುಬಂಧದಲ್ಲಿ ಲಗತ್ತಿಸಿದೆ. |
| (ಆ) | ಬೀದರ್ ಜಿಲ್ಲೆಯಲ್ಲಿ ಕಲ್ಲು ಗಣಿಗಾರಿಕೆಯಲ್ಲಿ ಬಾಲ ಕಾರ್ಮಿಕರನ್ನು ದುಡಿಸಿಕೊಳ್ಳುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ ಸರ್ಕಾರ ಕೈಗೊಂಡ ಕ್ರಮಗಳೇನು? | ಬೀದರ್ ಜಿಲ್ಲೆಯಲ್ಲಿ ಬಾಲಕಾರ್ಮಿಕ ಪದ್ಧತಿಯನ್ನು ತಡೆಗಟ್ಟಲು ನಡೆಸಲಾದ ತಪಾಸಣೆ ದಾಳಿಗಳಲ್ಲಿ ಕಲ್ಲು ಗಣಿಗಾರಿಕೆಯಲ್ಲಿ ಯಾವುದೇ ಬಾಲಕಾರ್ಮಿಕರು ಕೆಲಸ ಮಾಡುತ್ತಿರುವುದು ಕಂಡುಬಂದಿರುವುದಿಲ್ಲ. ಕಂಡುಬಂದಲ್ಲಿ ತಪ್ಪಿತಸ್ಥ ಮಾಲೀಕರ ವಿರುದ್ಧ ನಿಯಮಾನುಸಾರ ಕ್ರಮಕೈಗೊಳ್ಳಲಾಗುವುದು. |

ಸಂಖ್ಯೆ: ಕಾಇ 10 ಸಿಎಲ್‌ಸಿ 2020

(ಅರಬೈಲ್ ಶಿವರಾಮ್ ಹೆಬ್ಬಾರ್)
ಕಾರ್ಮಿಕ & ಸಕ್ಕರೆ ಸಚಿವರು.

# ಅನುಬಂಧ

| ಕ್ರ.ಸಂ | ವರ್ಷ | ನಡೆಸಲಾದ ತಪಾಸಣೆಗಳು | ರಕ್ಷಿಸಿದ ಬಾಲಕಾರ್ಮಿಕರ ಸಂಖ್ಯೆ | ಉಲ್ಲಂಘನೆಯಾದ ಪ್ರಕರಣಗಳ ಸಂಖ್ಯೆ | ಮೊಕದ್ದಮೆ ದಾಖಲಿಸಲಾದ ಪ್ರಕರಣಗಳು | ಶಿಕ್ಷೆಯಾದ ಪ್ರಕರಣಗಳು | ವಸೂಲಾತಿಯಾದ ದಂಡ | ಶಿಕ್ಷೆಗೊಳಗಾದ ವ್ಯಕ್ತಿಗಳ ಸಂಖ್ಯೆ | ಪುನರ್ವಸತಿ/ ಶಿಕ್ಷಣದ ವಿವರಗಳು |
|---|---|---|---|---|---|---|---|---|---|
| 1 | 2017 | 265 | 22 | 22 | 11 | – | 20,000 | –– | 22 |
| 2 | 2018 | 245 | 17 | 17 | 17 | 02 (ದಂಡ ವಿಧಿಸಲಾಗಿರುತ್ತದೆ.) | 20,000 | –– | 17 |
| 3 | 2019 | 300 | 12 | 12 | 09 | – | – | – | 12 |
| ಒಟ್ಟು | | 810 | 51 | 51 | 37 | 02 | 40,000 | – | 51 |

# ಕರ್ನಾಟಕ ಸರ್ಕಾರ ಕಾರ್ಮಿಕ ಇಲಾಖೆ

## ಕರ್ನಾಟಕ ರಾಜ್ಯ ಬಾಲಕಾರ್ಮಿಕ ನಿರ್ಮೂಲನಾ ಯೋಜನಾ ಸೊಸೈಟಿ, ಬೆಂಗಳೂರು

**ಗೌರವಾನ್ವಿತ ವಿಧಾನ ಪರಿಷತ್ತಿನ ಸದಸ್ಯರಾದ ಶ್ರೀ ವಿಜಯ ಸಿಂಗ್ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) ಇವರ ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ: 66(530) ಕ್ಕೆ ಪೂರಕ ಟಿಪ್ಪಣಿ**

**ಪೀಠಿಕೆ:-** ಬಾಲ್ಯಾವಸ್ಥೆಯ ಹಾಗೂ ಕಿಶೋರಾವಸ್ಥೆಯ ಕಾರ್ಮಿಕ ಪದ್ಧತಿಯು ಮಗುವಿನ ಸುರಕ್ಷತೆ, ಭಾವನಾತ್ಮಕ ಒಳಿತು, ಕಲಿಕೆ ಹಾಗೂ ಸರ್ವತೋಮುಖ ಅಭಿವೃದ್ಧಿಗೆ ಮಾರಕವಾಗಿರುತ್ತದಲ್ಲದೇ, ಈ ಪದ್ಧತಿಯು ಮಾನವ ಹಕ್ಕುಗಳ ಉಲ್ಲಂಘನೆಯಾಗಿದೆ. ಈ ಹೀನ ಪದ್ಧತಿಯು ಮಕ್ಕಳನ್ನು ದೈಹಿಕವಾಗಿ, ನೈತಿಕವಾಗಿ, ಮಾನಸಿಕವಾಗಿ ಹಾಗೂ ಆರ್ಥಿಕವಾಗಿ ಶೋಷಣೆಗೆ ಒಳಪಡಿಸಿ ಅವರ ಶಿಕ್ಷಣದ ಅವಕಾಶಗಳನ್ನು ತಡೆಗಟ್ಟುತ್ತದೆ. ಮಕ್ಕಳಿಂದ ದುಡಿಸಿಕೊಳ್ಳುವುದು, ಭಾರತದ ಸಂವಿಧಾನದ ಆಶಯಕ್ಕೆ ವಿರುದ್ಧವಾಗಿರುತ್ತದೆ. ಬಾಲಕಾರ್ಮಿಕ ಪದ್ಧತಿಯನ್ನು ನಿರ್ಮೂಲನೆ ಮಾಡುವುದು ಪ್ರತಿಯೊಬ್ಬ ನಾಗರೀಕನ ಕರ್ತವ್ಯವಾಗಿದೆ. ಈ ಪದ್ಧತಿಯನ್ನು ತಡೆಗಟ್ಟಲು ಹಾಗೂ ನಿರ್ಮೂಲನೆಗೊಳಿಸಲು ಹಲವಾರು ಕ್ರಿಯಾಶೀಲವಾದ ಕ್ರಮಗಳನ್ನು ಕೈಗೊಂಡಿರುತ್ತದೆ.

**ರಾಷ್ಟ್ರೀಯ ಬಾಲಕಾರ್ಮಿಕ ಯೋಜನೆ / ರಾಜ್ಯ ಬಾಲಕಾರ್ಮಿಕ ಯೊಜನೆ ಇವರುಗಳ ರಚನೆ/ ಕಾರ್ಯವ್ಯಾಪ್ತಿ:-**

a. **ರಾಷ್ಟ್ರೀಯ ಬಾಲ ಕಾರ್ಮಿಕ ಯೋಜನೆ** (ಎನ್.ಸಿ.ಎಲ್.ಪಿ): ಕೇಂದ್ರ ಸರ್ಕಾರವು ಈ ಯೋಜನೆಯನ್ನು 1988ರಲ್ಲಿ ಪ್ರಾರಂಭಿಸಿದ್ದು, ಪ್ರಸಕ್ತವಾಗಿ ರಾಜ್ಯದ ಹದಿನೇಳು ಜಿಲ್ಲೆಗಳಲ್ಲಿ ಜಾರಿಯಲ್ಲಿರುತ್ತದೆ. ಸದರಿ ಜಿಲ್ಲೆಗಳು ಬೆಂಗಳೂರು ಗ್ರಾಮಾಂತರ, ಬೆಂಗಳೂರು ನಗರ, ಬಾಗಲಕೋಟೆ, ಬಳ್ಳಾರಿ, ವಿಜಯಪುರ, ಬೆಳಗಾವಿ, ಚಿತ್ರದುರ್ಗ, ದಾವಣಗೆರೆ, ಧಾರವಾಡ, ಕಲಬುರಗಿ, ಕೋಲಾರ, ಕೊಪ್ಪಳ, ಮಂಡ್ಯ, ಮೈಸೂರು, ರಾಯಚೂರು, ಹಾವೇರಿ ಹಾಗೂ ತುಮಕೂರು.

b. **ರಾಜ್ಯ ಬಾಲ ಕಾರ್ಮಿಕ ಯೋಜನೆ** (ಎಸ್.ಸಿ.ಎಲ್.ಪಿ): ಈ ಯೋಜನೆಯನ್ನು ರಾಜ್ಯ ಸರ್ಕಾರವು ಭಾರತ ಸರ್ಕಾರದ ರಾಷ್ಟ್ರೀಯ ಬಾಲ ಕಾರ್ಮಿಕ ಯೋಜನೆ (ಎನ್.ಸಿ.ಎಲ್.ಪಿ)ಯ ಮಾದರಿಯಲ್ಲಿ ಇನ್ನುಳಿದ ಹದಿಮೂರು ಜಿಲ್ಲೆಗಳಲ್ಲಿ 2001ರಲ್ಲಿ ಪ್ರಾರಂಭಿಸಿರುತ್ತದೆ. ಸದರಿ ಜಿಲ್ಲೆಗಳು ಬೀದರ್, ಚಾಮರಾಜನಗರ, ಚಿಕ್ಕಮಗಳೂರು, ಗದಗ, ಹಾಸನ, ಉತ್ತರ ಕನ್ನಡ, ದಕ್ಷಿಣ ಕನ್ನಡ, ಶಿವಮೊಗ್ಗ, ಉಡುಪಿ, ರಾಮನಗರ, ಯಾದಗಿರಿ, ಚಿಕ್ಕಬಳ್ಳಾಪುರ ಹಾಗೂ ಕೊಡಗು.

ಮೇಲ್ಕಂಡ ಎರಡು ಯೋಜನೆಗಳ ಮೂಲಕ ಅಪಾಯಕಾರಿ ಉದ್ದಿಮೆಗಳಲ್ಲಿ ಕೆಲಸ ನಿರ್ವಹಿಸುತ್ತಿರುವ ಮಕ್ಕಳನ್ನು ಪತ್ತೆಮಾಡಲು ಸಮೀಕ್ಷೆಯನ್ನು ನಡೆಸಿ 6 ರಿಂದ 14 ವರ್ಷದೊಳಗಿನ ಮಕ್ಕಳು ಯಾವುದೇ ಉದ್ಯೋಗ ಅಥವಾ ಪ್ರಕ್ರಿಯೆಗಳಲ್ಲಿ ಹಾಗೂ 18 ವರ್ಷ ವಯಸ್ಸಿನವರೆಗಿನ ಕಿಶೋರರು ಅಪಾಯಕಾರಿ ಉದ್ದಿಮೆಗಳಲ್ಲಿ ದುಡಿಯುವುದು ಕಂಡುಬಂದಲ್ಲಿ ಕೆಲಸದಿಂದ ಬಿಡುಗಡೆಗೊಳಿಸಲು ಕ್ರಮವಹಿಸಲಾಗುತ್ತದೆ.

## ಬೀದರ್ ಜಿಲ್ಲೆಗೆ ಸಂಬಂಧಿಸಿದ ಮಾಹಿತಿ:-

ಬೀದರ್ ಜಿಲ್ಲೆಯಲ್ಲಿ ರಾಜ್ಯ ಸರ್ಕಾರದ ರಾಜ್ಯ ಬಾಲ ಕಾರ್ಮಿಕ ಯೋಜನೆ (ಎಸ್.ಸಿ.ಎಲ್.ಪಿ)ಯು ಜಾರಿಯಲ್ಲಿದ್ದು, ಬಾಲ್ಯಾವಸ್ಥೆಯ ಹಾಗೂ ಕಿಶೋರಾವಸ್ಥೆಯ ಕಾರ್ಮಿಕರ ಪುನರ್ವಸತಿಗಾಗಿ ರಾಜ್ಯ ಸರ್ಕಾರದಿಂದ ಅನುದಾನ ಬಿಡುಗಡೆಯಾಗುವುದು.

1. **ತಪಾಸಣೆಗಳು:**-ಕಳೆದ ಐದು ವರ್ಷಗಳಲ್ಲಿ ಬಾಲ್ಯಾವಸ್ಥೆಯ ಹಾಗೂ ಕಿಶೋರಾವಸ್ಥೆಯ ಕಾರ್ಮಿಕರ ತಪಾಸಣೆಗಳ ವಿವರ ಈ ಕೆಳಕಂಡಂತೆ ಇರುತ್ತದೆ;

| ಕ್ರ ಸಂ | ವರ್ಷ | ನಡೆಸಲಾದ ತಪಾಸಣೆಗಳು | ರಕ್ಷಿಸಿದ ಬಾಲಕಾರ್ಮಿಕರ ಸಂಖ್ಯೆ | ಉಲ್ಲಂಘನೆಯಾದ ಪ್ರಕರಣಗಳ ಸಂಖ್ಯೆ | ಮೊಕದ್ದಮೆ ದಾಖಲಿಸಲಾದ ಪ್ರಕರಣಗಳು | ಶಿಕ್ಷೆಯಾದ ಪ್ರಕರಣಗಳು | ವಸೂಲಾತಿಯಾದ ದಂಡ (ರೂ.ಗಳಲ್ಲಿ) | ಶಿಕ್ಷೆಗೊಳಗಾದ ವ್ಯಕ್ತಿಗಳ ಸಂಖ್ಯೆ |
|---|---|---|---|---|---|---|---|---|
| 1 | 2015 | 248 | 03 | 03 | 03 | -- | -- | --- |
| 2 | 2016 | 198 | 09 | 05 | 05 | -- | -- | --- |
| 3 | 2017 | 265 | 22 | 22 | 11 | -- | 20,000=00 | --- |
| 4 | 2018 | 245 | 17 | 17 | 17 | 02 | 20,000=00 | --- |
| 5 | 2019 | 300 | 12 | 12 | 09 | -- | -- | --- |
| | ಒಟ್ಟು | **1256** | **63** | **59** | **45** | **02** | **40,000=00** | ---- |

2. **ಅನುದಾನ:**- ಕಳೆದ ಐದು(5) ವರ್ಷಗಳಲ್ಲಿ ಬೀದರ್ ಜಿಲ್ಲೆಗೆ ಬಾಲ್ಯಾವಸ್ಥೆಯ ಹಾಗೂ ಕಿಶೋರಾವಸ್ಥೆಯ ಕಾರ್ಮಿಕರ ನಿರ್ಮೂಲನೆಗಾಗಿ ರಾಜ್ಯ ಸರ್ಕಾರದಿಂದ ಬಿಡುಗಡೆಯಾದ ಅನುದಾನ ಮತ್ತು ವೆಚ್ಚವಾದ ಮಾಹಿತಿ ಈ ಕೆಳಕಂಡಂತೆ ಇರುತ್ತವೆ;

| ಕ್ರ.ಸಂ | ವರ್ಷ | ಬಿಡುಗಡೆಯಾದ ಅನುದಾನ (ರೂ.ಗಳಲ್ಲಿ) | ವೆಚ್ಚವಾದ್ ಅನುದಾನ (ರೂ.ಗಳಲ್ಲಿ) | ಪ್ರಸಕ್ತ ಲಭ್ಯವಿರುವ ಅನುದಾನ (ರೂ.ಗಳಲ್ಲಿ) | ಷರಾ |
|---|---|---|---|---|---|
| **1** | **2** | **3** | **4** | **5** | **6** |
| 2 | 2015-16 | 50000=00 | 8,65,871=00 | 14,55,775=00 | |
| 3 | 2016-17 | 1270264=00 | 6,69,791=00 | 21,34,011=00 | |
| 4 | 2017-18 | 2446545=00 | 7,13,210=00 | 39,63,312=00 | |
| 5 | 2018-19 | 929000=00 | 17,54,887=00 | 32,66,658=00 | |
| 6 | 2019-20 | 1230534=00 | 13,83,021=00 | 15,74,134=00 | |

3. **ಜನಜಾಗೃತಿ ಕಾರ್ಯಕ್ರಮಗಳು:-** ಬೀದರ್ ಜಿಲ್ಲೆಯಲ್ಲಿ ಬಾಲ್ಯಾವಸ್ಥೆಯ ಹಾಗೂ ಕಿಶೋರಾವಸ್ಥೆಯ ಕಾರ್ಮಿಕರ ನಿರ್ಮೂಲನೆಗಾಗಿ ಕಳೆದ ಐದು ವರ್ಷಗಳಲ್ಲಿ ಕೈಗೊಂಡಂಡ ಜನಜಾಗೃತಿ ಕಾರ್ಯಕ್ರಮಗಳ ವಿವರಗಳು ಈ ಕೆಳಕಂಡಂತೆ ಇರುತ್ತವೆ;

| ಕ್ರ. ಸಂ | ಕಾರ್ಯಕ್ರಮಗಳ ವಿವರ | ವರ್ಷವಾರು ಕಾರ್ಯಕ್ರಮಗಳ ಸಂಖ್ಯೆ | | | | |
|---|---|---|---|---|---|---|
| | | **2015-16** | **2016-17** | **2017-18** | **2018-19** | **2019-20** |
| 1 | 2 | 3 | 4 | 5 | 6 | 7 |
| 1 | ಬೀದಿ ನಾಟಕಗಳ ಸಂಖ್ಯೆ | 08 | --- | 30 | 19 | 34 |
| 2 | ಗೋಡೆ ಬರಹಗಳ ಸಂಖ್ಯೆ | --- | --- | --- | 42 | 124 |
| 3 | ಕರಪತ್ರಗಳ ಸಂಖ್ಯೆ | 985 | 1657 | 3656 | 354 | 2906 |
| 4 | ಆಟೋ ಪ್ರಚಾರಗಳ ಸಂಖ್ಯೆ | --- | --- | --- | --- | 20 ದಿವಸಗಳು |
| 5 | ನಡೆಸಲಾದ ಕಾನೂನು ಅರಿವು-ನೆರವು ಕಾರ್ಯಕ್ರಮಗಳ ಸಂಖ್ಯೆ | --- | 05 | 05 | 05 | 10 |
| 6 | ತರಬೇತಿ ಕಾರ್ಯಗಾರಗಳ ಸಂಖ್ಯೆ | 25 ಸ್ವ- ಸಹಾಯ ಸಂಘಗಳಿಗೆ ತರಬೇತಿ | --- | --- | --- | 01 ಸೆಕ್ಸನ್ 17ರಡಿ ಬರುವ ಅಧಿಕಾರಿ ನಿರೀಕ್ಷಕರುಗಳಿಗೆ ತರಬೇತಿ |
| 7 | ಭಿತ್ತಿ ಪತ್ರಗಳ ಸಂಖ್ಯೆ | 129 | 348 | 365 | 295 | 350 |
| 8 | ಇತರೆ | --- | --- | --- | --- | --- |

4. **ಬಾಲ್ಯಾವಸ್ಥೆ ಹಾಗೂ ಕಿಶೋರಾವಸ್ಥೆಯ ಕಾರ್ಮಿಕರನ್ನು ಮುಖ್ಯವಾಹಿನಿಗೆ ದಾಖಲು ಮಾಡಿದ ವಿವರಗಳು:-** ಬೀದರ್ ಜಿಲ್ಲೆಯಲ್ಲಿ ಕಳೆದ ಐದು ವರ್ಷಗಳಲ್ಲಿ ಬಾಲ್ಯಾವಸ್ಥೆಯ ಹಾಗೂ ಕಿಶೋರಾವಸ್ಥೆಯ ಕಾರ್ಮಿಕರನ್ನು ಮುಖ್ಯವಾಹಿನಿಗೆ ದಾಖಲು ಮಾಡಿದ ವಿವರಗಳು ಈ ಕೆಳಕಂಡಂತೆ ಇರುತ್ತವೆ;

**ಬಾಲ್ಯಾವಸ್ಥೆ ಹಾಗೂ ಕಿಶೋರಾವಸ್ಥೆಯ ಕಾರ್ಮಿಕರನ್ನು ಮುಖ್ಯವಾಹಿನಿಗೆ ದಾಖಲು ಮಾಡಿದ ವಿವರ**

| ಕ್ರ.ಸಂ | ವರ್ಷ | ಗಂಡು | ಹೆಣ್ಣು | ಒಟ್ಟು | ಷರಾ |
|---|---|---|---|---|---|
| **1** | **2** | **3** | **4** | **5** | **6** |
| 1 | 2015-16 | 25 | -- | 25 | |
| 2 | 2016-17 | 25 | -- | 25 | |
| 3 | 2017-18 | 10 | 09 | 19 | |
| 4 | 2018-19 | 45 | -- | 45 | |
| 5 | 2019-20 | 14 | -- | 14 | |

5. **ಪುನರ್ವಸತಿಗೊಳಿಸಲಾದ ಬಾಲ್ಯಾವಸ್ಥೆ ಹಾಗೂ ಕಿಶೋರಾವಸ್ಥೆ ಕಾರ್ಮಿಕರ ವಿವರಗಳು:-** ಬೀದರ್ ಜಿಲ್ಲೆಯಲ್ಲಿ ಪುನರ್ವಸತಿಗೊಳಿಸಲಾದ ಬಾಲ್ಯಾವಸ್ಥೆಯ ಹಾಗೂ ಕಿಶೋರಾವಸ್ಥೆಯ ಕಾರ್ಮಿಕರ ಮಾಹಿತಿ ಈ ಕೆಳಕಂಡಂತೆ ಇರುತ್ತದೆ;

| ಕ್ರ.ಸಂ | ವರ್ಷ | ಪುನರ್ವಸತಿಗೊಳಿಸಲಾದ ಬಾಲ್ಯಾವಸ್ಥೆ ಹಾಗೂ ಕಿಶೋರಾವಸ್ಥೆ ಕಾರ್ಮಿಕರ ಸಂಖ್ಯೆ |
|---|---|---|
| **1** | **2** | **3** |
| 2 | 2017-18 | 22 |
| 3 | 2018-19 | 17 |
| 4 | 2019-20 | 12 |

ಬೀದರ್ ನಗರದಲ್ಲಿ 2019ರ ಜೂನ್ ವರೆಗೂ ಬಾಲಕಾರ್ಮಿಕರ ವಿಶೇಷ ತರಬೇತಿ ಕೇಂದ್ರವು ಕಾರ್ಯನಿರ್ವಹಿಸುತ್ತಿದ್ದು, ಸರ್ಕಾರದ ಆದೇಶ ಸಂಖ್ಯೆ: ಕಾಇ 45 ಸಿಎಲ್‌ಸಿ 2017, ಬೆಂಗಳೂರು ದಿನಾಂಕ:22/01/2018ರ ಪ್ರಕಾರ ನಿಗಧಿತ ಸಂಖ್ಯೆಯ ಬಾಲ್ಯಾವಸ್ಥೆ ಹಾಗೂ ಕಿಶೋರಾವಸ್ಥೆ ಕಾರ್ಮಿಕರು ಇಲ್ಲದ ಕಾರಣದಿಂದ ಪ್ರಸ್ತುತ ಯಾವುದೇ ಬಾಲಕಾರ್ಮಿಕ ವಿಶೇಷ ತರಬೇತಿ ಕೇಂದ್ರಗಳು ಅಸ್ತಿತ್ವದಲ್ಲಿರುವುದಿಲ್ಲ.

6. **ಬಾಲಕಾರ್ಮಿಕ ಯೋಜನೆ ಪ್ರಾರಂಭವಾದ ವರ್ಷದಿಂದ ಸಂಗ್ರವಾದ ಕಾರ್ಪಸ್ ನಿಧಿಯ ವಿವರಗಳು :-** ಬೀದರ್ ಜಿಲ್ಲೆಯಲ್ಲಿ ಬಾಲಕಾರ್ಮಿಕ ಯೋಜನೆ ಪ್ರಾರಂಭವಾದ ವರ್ಷದಿಂದ ಸಂಗ್ರಹವಾದ ಕಾರ್ಪಸ್ ನಿಧಿಯ ವಿವರಗಳು ಈ ಕೆಳಕಂಡಂತೆ ಇರುತ್ತದೆ;

| ಕ್ರ.ಸಂ | ವರ್ಷ | ಕಾರ್ಪಸ್ ನಿಧಿಯ ಮೊತ್ತ ಪರಿಹಾರ ವಸೂಲಾತಿ ಮೊತ್ತ (ರೂ.ಗಳಲ್ಲಿ) |
|---|---|---|
| **1** | **2** | **3** |
| 1 | 2019-20 | 60,000/- |
| 2 | 2018-19 | --- |
| 3 | 2017-18 | 20,000/- |
| 4 | 2016-17 | 40,000/- |
| 5 | 2015-16 | --- |
| | ಒಟ್ಟು | **1,20,000** |

7. ಬಾಲಕಾರ್ಮಿಕ ಸಹಾಯವಾಣಿ 1098/155214 ಹಾಗೂ ಸಹಾಯವಾಣಿ ವ್ಯಾಟ್ಸಪ್ ಸಂಖ್ಯೆ: 9333333684 ರ ಮೂಲಕ ಬಾಲಕಾರ್ಮಿಕರ ಹಾಗೂ ಕಿಶೋರ ಕಾರ್ಮಿಕರು ಕೆಲಸದಲ್ಲಿ ತೊಡಗಿರುವ ಬಗ್ಗೆ ದೂರು ಸ್ವೀಕರಿಸಿ ಸ್ವೀಕರಿಸಲಾದ ದೂರುಗಳ ಬಗ್ಗೆ ಕಾನೂನಿನ್ವಯ ಮಕ್ಕಳನ್ನು ಕೆಲಸದಿಂದ ಬಿಡುಗಡೆಗೊಳಿಸಲು, ಪುನರ್ವಸತಿ ಕಲ್ಪಿಸಲು ಹಾಗೂ ಅವರ ಸ್ವ-ಸ್ಥಾನಕ್ಕೆ ಕಳುಹಿಸಲು ಕ್ರಮಗಳನ್ನು ಕೈಗೊಳ್ಳಲಾಗುತ್ತಿದೆ.

********